19

# ರಥೋತ್ಸವ



ಮಂಗಳೂರು ಶ್ರೀ ವೆಂಕಟ್ರಮಣ ದೇವಸ್ಥಾನದ ಹೊರನೋಟ.

**1955** ಬೆಲೆ ಆಣೆ ೧.

ಒಂದಾಣೆ ಮಾಲೆ — ಮಂಗಳೂರು.

# ರಥೋತ್ಸವ

## ೧. 'ರಥಸಪ್ತಮಿ' ಕುರಿತು ಪೌರಾಣಿಕ ಕಥೆ.

ರಥಸಪ್ತಮಿಯು, ಪ್ರತಿ ವರುಷ, ಮಾಘ ಶುದ್ಧ ೭ಯು ಆಚರಿಸಲ್ಪಡುತ್ತದೆ. ರಥಸಪ್ತಮಿಯ ಕುರಿತು ಈ ವಿವರವು ಇದೆ:

ವೈದಿಕ ಗ್ರಂಥಗಳನ್ವಯ, ಸೂರ್ಯನಾರಾಯಣನು ರಥಾರೂಢನಾಗಿ ಸಮಸ್ತ ಲೋಕವನ್ನು ಸಂಚರಿಸುತ್ತಿರುವನು. ಸೂರ್ಯನ ರಥಕ್ಕೆ ಸಪ್ತ ಅಶ್ವಗಳಿರುವುವು. "ಸಪ್ತಾಶ್ವರಥ ಸಂಯುಕ್ತಃ" ಎಂದು ವರ್ಣನೆಯಿದೆ. ಈ ಕುದುರೆಯ ರೂಪಕವನ್ನು ಸೂಕ್ಷ್ಮವಾಗಿ ನೋಡಿದರೆ, ಆಧುನಿಕ ವಿಜ್ಞಾನವು ವಿಶದೀಕರಿಸಿದಂತೆ ಸೂರ್ಯಕಿರಣಗಳಲ್ಲಿ ತೋರಿಬರುವ ವಿವಿಧ ಬಣ್ಣಗಳನ್ನೇ ಕುದುರೆಗಳಾಗಿ ವರ್ಣಿಸಿರುವರೆಂದೂಹಿಸಬಹುದು.

ಮಾಘ ಶುದ್ಧ ಸಪ್ತಮಿಯಿಂದ ಸೂರ್ಯನು ರಥಾರೂಢನಾಗಿ ಮಾರ್ಗವನ್ನಾಕ್ರಮಿಸುವನೆಂದು ಪೂರ್ವಜರು ನಂಬಿದ್ದರು. ಆದುದರಿಂದಲೇ ಆ ದಿನ ಸೂರ್ಯನ ಮಹಾತ್ಮ್ಯವು ವಿಶೇಷವಿದೆಯೆಂದು ಅವರ ವಿಶ್ವಾಸ. ಆ ಸಂಬಂಧದಲ್ಲಿ, ಶ್ರೀ ಕೃಷ್ಣನು ಧರ್ಮರಾಯನಿಗೆ ಒಂದು ಕಥೆಯನ್ನೂ ಹೇಳಿರುವ ಉಲ್ಲೇಖವಿದೆ: ಕಾಂಬೋಜ ದೇಶವನ್ನೊಮ್ಮೆ ಯಶೋವರ್ಮನೆಂಬ ಅರಸನು ಆಳುತಿದ್ದನು. ಅವನು ದಯಾಶಾಲಿಯೂ, ಉದಾರನೂ ಸತ್ಯವಂತನೂ, ನೀತಿಪರನೂ ಆಗಿದ್ದನು. ಬಹುಕಾಲ ಸಂತತಿಯೇ ಇಲ್ಲದ ಆ ಅರಸನಿಗೆ, ಮುಪ್ಪಿನಲ್ಲಿ ದೇವತಾನುಗ್ರಹದಿಂದ ಒಂದು ಗಂಡು ಮಗು ಜನಿಸಿತು. ಆ ಮಗುವು ಅಶಕ್ತ ಹಾಗೂ ರೋಗಗ್ರಸ್ತವಾಗಿತ್ತು. ಅರಸನಿಗೆ ಬಹು ವ್ಯಸನವಾಯಿತು. ಮಗುವಿಗೆ ದೃಢ ಆರೋಗ್ಯವು ಪ್ರಾಪ್ತವಾಗುವ ವಿಷಯದಲ್ಲಿ ಅವನು ಚಿಂತಿತನಾದನು. ಹೀಗಿರಲಾಗಿ, ಒಮ್ಮೆ ಅವನು ಜ್ಯೋತಿಷ್ಯರನ್ನು ಕರೆಯಿಸಿ, ವಿಚಾರಿಸಲಾಗಿ, ಅವರು ಹೀಗೆಂದರು: "ಇವನು (ಮಗು) ಪೂರ್ವಜನ್ಮದಲ್ಲಿ ದಾನ ಧರ್ಮಗಳೇನನ್ನೂ ಮಾಡಿರಲಿಲ್ಲ. ಬಡವರನ್ನೂ ಬ್ರಾಹ್ಮಣರನ್ನೂ ತಿರಸ್ಕರಿಸುತಿದ್ದನು. ಸೂರ್ಯ ನಾರಾಯಣನ

ಪೂಜೆಯನ್ನೂ ಮಾಡುತ್ತಿರಲಿಲ್ಲ. ಈ ಎಲ್ಲ ಕಾರಣಗಳಿಂದ ಹೀಗಾಯಿತು. ತಾವು, ರಥಸಪ್ತಮಿಯದಿನ, ಇವನಿಗಾಗಿ ಸೂರ್ಯೋಪಾಸನೆಯನ್ನು ಮಾಡುವ ಕ್ರಮವನ್ನು ಕೈಕೊಂಡರೆ, ಇವನ ರೋಗವು ಗುಣವಾದೀತು. ಶರೀರವು ಸುದೃಢವಾಗಿ, ಸಕಲ ಐಶ್ವರ್ಯ–ಜೀವನ ಸಂತೋಷಗಳನ್ನೂ ಅನುಭವಿಸುವವನಾಗುವನು.” ಅರಸನು ರಥಸಪ್ತಮೀ ವ್ರತದ ವಿಧಾನಗಳನ್ನು ತಿಳಿದುಕೊಂಡು, ಆ ಪ್ರಕಾರ ನಿಯಮದಿಂದ ಆಚರಿಸಿದನು. ಅದರಿಂದ ಅವನ ಮಗನ ರೋಗವು ಗುಣವಾಗಿ, ಆ ಮಗನು ಬಲಿಷ್ಠನಾಗಿ ಬೆಳೆದು, ರಾಜ್ಯಶ್ರೀಯೂ ಬಹುಕಾಲದ ವರೆಗೆ ಪ್ರಾಪ್ತವಾಯಿತು.

ಶ್ರೀ ಕೃಷ್ಣನು ಹೇಳಿದ ಕಥೆಯನ್ನು ಕೇಳಿ ಧರ್ಮರಾಯನು ಕೂಡ ರಥಸಪ್ತಮೀ ವ್ರತವನ್ನು ಆಚರಿಸಿ ಇಷ್ಟಫಲವನ್ನು ಪಡೆದನು.

ಭಾರತೀಯರು ಯಾವಾಗಲೂ ಸೂರ್ಯಾರಾಧನೆಗೆ ಪ್ರಾಶಸ್ತ್ಯ ಕೊಟ್ಟಿದ್ದರು. ಶ್ರೀ ರಾಮಚಂದ್ರನ ಅರಮನೆಯಲ್ಲಿ ಸೂರ್ಯ ನಾರಾಯಣನ ವಿಗ್ರಹವಿತ್ತೆಂದು ಹೇಳುವರು. ಕೆಲವು ವರ್ಷಗಳ ಹಿಂದೆ ಔಂಧ ಮಹಾರಾಜರು, ವ್ಯಾಯಾಮಗಳಲ್ಲಿ ಅತ್ಯುತ್ತಮವಾದುದು ಸೂರ್ಯ ನಮಸ್ಕಾರವೆಂದೂ, ಅದುವೇ ಸೂರ್ಯಾರಾಧನೆಯೆಂದೂ ಪ್ರಚುರಿಸಿ, ಈ ಸೂರ್ಯ ನಮಸ್ಕಾರಗಳನ್ನು ನಿತ್ಯವೂ ಕೈಕೊಳ್ಳುವವರು ಶತಾಯುಷಿಗಳಾಗುವರೆಂದೂ, ಬಹುಕಾಲ ಸುದೃಢ ಯೌವನವನ್ನುಳಿಸಿಕೊಳ್ಳುವರೆಂದೂ ಭಾರತದಲ್ಲಿಯೂ, ವಿದೇಶಗಳಲ್ಲಿಯೂ, ಪ್ರಚಾರ ಮಾಡಿರುವರು.

ದಕ್ಷಿಣ ಭಾರತದ ಹಲವು ಕ್ಷೇತ್ರಗಳಲ್ಲಿಯೂ ಉತ್ತರ ಭಾರತದಲ್ಲೂ ಈ ರಥಸಪ್ತಮಿಯು, ವರುಷದ ಅತೀ ದೊಡ್ಡ ಮಹೋತ್ಸವವಾಗಿ ಆಚರಿಸಲ್ಪಡುತ್ತದೆ. ಪುರಿಯಲ್ಲಿ ನಡೆವ ರಥೋತ್ಸವವು, ಜಗತ್ಪ್ರಸಿದ್ಧವೇ ಆಗಿದೆ. ಈ ವಹಿಯಲ್ಲಿ ಅದನ್ನು ತುಸು ವಿವರಿಸಿರುವೆವು.

ರಥಸಪ್ತಮೀ ವ್ರತವನ್ನು ಆಚರಿಸುವ ಕ್ರಮವನ್ನು ಧರ್ಮಶಾಸ್ತ್ರಕಾರರು ಅನೇಕ ವಿಧದಿಂದ ವರ್ಣಿಸಿರುತ್ತಾರೆ. ರಥಸಪ್ತಮಿಯ ಮೊದಲನೇ ದಿನ, ಅಂದರೆ ಮಾಘಶುದ್ಧ ಷಷ್ಠೀ ದಿನ, ಏಕಭುಕ್ತಮಾಡಿ, ರಾತ್ರಿಯ ಅಂತ್ಯದಲ್ಲಿ, (ಅಂದರೆ ಪ್ರಾತಃಕಾಲ), ಮಸ್ತಕದ ಮೇಲೆ ದೀಪವನ್ನಿರಿಸಿಕೊಂಡು ಜಲಾಶಯಕ್ಕೆ ಹೋಗಿ ಕೆಲವು ಮಂತ್ರಗಳಿಂದ ಸ್ನಾನಮಾಡತಕ್ಕದ್ದು. ಸೂರ್ಯ ಪ್ರೀತ್ಯರ್ಥ ಚಿನ್ನದ ಅಥವಾ ಬೆಳ್ಳಿಯ ಪಾತ್ರದಲ್ಲಿ

ದೀಪವನ್ನು ಹಚ್ಚಿ ಆ ದೀಪವನ್ನು ಪುನಃ ತಲೆಯ ಮೇಲಿಟ್ಟುಕೊಂಡು ಮನೆಗೆ ಬಂದು, ಸೂರ್ಯ ಪೂಜೆ ಮಾಡತಕ್ಕದ್ದು. ಧರ್ಮಶಾಸ್ತ್ರದಲ್ಲಿ ಹೇಳಿರುವ ಈ ಕ್ರಮವು ಈಗ ಜನರ ಆಚಾರದಲ್ಲಿ ಕಂಡುಬರುವುದಿಲ್ಲ. ಈಗ ರೂಢಿಯಲ್ಲಿರುವ ರಥಸಪ್ತಮಿಯ ವಿಧಾನವು ಯಾವುದೆಂದರೆ—ಆ ದಿನ ಪ್ರಾತಃಕಾಲದಲ್ಲಿ ಸ್ನಾನಾಹ್ನಿಕಗಳನ್ನು ಮುಗಿಸಿ, ತುಲಸಿ ಕಟ್ಟೆಯ ಸುತ್ತಲೂ ಸ್ವಚ್ಛಪಡಿಸಿ ರಂಗವಲ್ಲಿಯಿಂದ ಅಲಂಕರಿಸುವುದು. ಏಳು ಕುದುರೆಗಳನ್ನು ಕಟ್ಟಿದ ರಥವನ್ನು ಬಿಡಿಸಿ, ರಥದಲ್ಲಿ ಸೂರ್ಯಪ್ರತಿಮೆಯನ್ನು ಬರೆಯುವುದು. ಸಪ್ತಧಾನ್ಯ, ರಕ್ತ ಪುಷ್ಪ, ರಕ್ತ ಚಂದನ, ರಕ್ತ ವಸ್ತ್ರ ಮುಂತಾದ ಸಾಹಿತ್ಯಗಳನ್ನು ತೆಗೆದುಕೊಂಡು, ರಥಸಪ್ತಮೀ ವ್ರತದ ಸಂಕಲ್ಪಮಾಡಿ, ಧ್ಯಾನಾವಾಹನಾದಿ ಷೋಡಶೋಪಚಾರಗಳಿಂದ ಸೂರ್ಯನಾರಾಯಣನನ್ನು ಪೂಜಿಸುವುದು. ಕೊನೆಗೆ—

ಸಪ್ತಸಪ್ತೀ ವಹಪ್ರೀತ ಸಪ್ತಲೋಕ ಪ್ರದೀಪನ।
ಸಪ್ತಮೀಸಹಿತೋದೇವ ಗೃಹಣಾರ್ಘ್ಯಂ ದಿವಾಕರ ॥

—ಈ ಮಂತ್ರದಿಂದ ಅರ್ಘ್ಯಕೊಟ್ಟು ಪ್ರಾರ್ಥಿಸುವುದು:—

ಪ್ರಾರ್ಥನಾ ಮಂತ್ರ॥ ಜನನೀ ಸರ್ವ ಲೋಕಾನಾಂ ಸಪ್ತಮೀ ಸಪ್ತಸಪ್ತಿಕೇ।
ಸಪ್ತವ್ಯಾಹೃತಿಕೇ ದೇವಿ ನಮಸ್ತೇ ಸೂರ್ಯ ಮಂಡಲೇ ॥

ಸೂರ್ಯೋಪಾಸನೆಯು ಅತೀ ಶ್ರೇಷ್ಟವಾದುದೆಂಬುದಕ್ಕೆ ಎರಡಭಿಪ್ರಾಯಗಳಿಲ್ಲ. "ಅಸವಾದಿತ್ಯೋ ಬ್ರಹ್ಮ" ಎಂದರೆ "ಈ ಸೂರ್ಯನ ಬ್ರಹ್ಮವು—ಜಗತ್ಕರಣವು" ಎಂಬುದಾಗಿ ನಮ್ಮ ಸಂಧ್ಯಾವಂದನದಲ್ಲಿ ಹೇಳಿರುತ್ತದೆ. ಪ್ರಶ್ನೋಪನಿಷತ್ತಿನಲ್ಲಿ "ಪ್ರಾಣಃ ಪ್ರಜಾನಾಮುದಯ ತ್ಯೇಷ ಸೂರ್ಯಃ"—ಎಂದರೆ ಸೂರ್ಯನು ಲೋಕದ ಪ್ರಾಣವು ಎಂಬುದಾಗಿ ವರ್ಣಿಸಿರುತ್ತದೆ.

## ೨. ರಥಸಪ್ತಮಿಯ ಇನ್ನೊಂದು ಅರ್ಥ

ಮಾಘ ಶುಕ್ಲ ಸಪ್ತಮಿಯ ಈ ಮಹೋತ್ಸವವು ಅತ್ಯಂತ ಉತ್ಸಾಹಪೂರ್ಣ ಮಾಸದ ಆಗಮನವನ್ನು ಸೂಚಿಸುತ್ತದೆ. ಸೃಷ್ಟಿಗೆ ಮಾಘಮಾಸವು ಅಧಿಕ ಪ್ರಿಯವಾಗಿದೆ. ಮಾಘದ ಚರಣಗಳ ಸಪ್ಪಳ ಕೇಳಿಯೋ, ಸೃಷ್ಟಿಯ ಮುಖದ ಬಣ್ಣವು ಬದಲಾಯಿಸುತ್ತದೆ. ವಸಂತದ ವಿಯೋಗ

ದಿಂದ ಅವಳು ತನ್ನ ಭಯದ ವಿರಹಾಗ್ನಿ "ಗ್ರೀಷ್ಮ"ವನ್ನು ಜ್ವಲಿಸುವ ಬಿಸಿ ಗಾಳಿಯ ರೂಪದಲ್ಲಿ ಪ್ರಕಟಿಸುವಳು. ವಿರಹದಿಂದ ವ್ಯಾಕುಲಳಾಗಿ, "ವರ್ಷ ಋತು"ವಿನ ರೂಪದಲ್ಲಿ ಅವಳು ಕಣ್ಣೀರುಗಳ ಜಡಿಮಳೆ ಸುರಿಸುವಳು. "ಹೇಮಂತ"ದ ಆಗಮನವು ಅವಳನ್ನು ಶಿಥಿಲ ಹಾಗೂ ಉದಾಸಳನ್ನಾಗಿ ಮಾಡುವುದು. ವಸಂತಾಗಮನದ ಮುಂಚಿನ ಮೇಘಮಾಸವು ಅವಳ ಮೇಲೆ ತನ್ನ ಪ್ರೇಮಾಮೃತವನ್ನು ಸುರಿಸುತ್ತದೆ. ಸೃಷ್ಟಿದೇವಿಯ ಮತ್ತು ಮಾಘ ಮಾಸದ ಈ ಅಮರ ಪ್ರೇಮದ ಸ್ಮೃತಿ ದಿನವು ರಥಸಪ್ತಮಿಯಾಗಿದೆ.

"ಶಿವೋ ಭೂತ್ವಾ ಶಿವಂ ಯಜೇತ್"—ಈ ತತ್ತ್ವಾನುಸಾರ ನಡೆಯುವ ಭಾರತೀಯ ಸಂಸ್ಕೃತಿಯು ವಿಚಾರಣೀಯ ವಿಷಯವನ್ನು ಎತ್ತಿ ಹೇಳುತ್ತದೆ. ಶಿವಪೂಜೆಮಾಡುವಾಗ ಶಿವ ಸಮಾನನಾಗಲು ಯತ್ನಿಸು. ಪೂಜ್ಯ ವ್ಯಕ್ತಿಯ ಅನುಸಾರ ಪೂಜೆ ಮಾಡಬೇಕು. ಕೇವಲ ಗಂಧ, ಅಕ್ಷತಾದಿ ಪೂಜನ ಸಾಮಗ್ರಿಗಳಿಂದ ಆರಾಧ್ಯ ದೇವರ ಪೂಜೆ ಮಾಡುವುದು ಭಾರತೀಯ ಸಂಸ್ಕೃತಿಯಲ್ಲಿಲ್ಲ. ಮಾಘಮಾಸದ ಈ ಪೂಜಾಪರ್ವವು ಪ್ರತ್ಯೇಕ ಮಾನವನ ಮಾಘದ ಆನಂದ, ಪೂರ್ಣ ಉತ್ಸಾಹ—ಈ ಭಾವನೆಗಳನ್ನು ಪರಿಪುಷ್ಟಮಾಡುತ್ತದೆ. ಹೃದಯದಲ್ಲಿ ಮಾಘಮಾಸದ ಗುಣಗಳ ಧ್ಯಾನ, ಮತ್ತು ಶರೀರದ ಮೇಲೆ ಮಾಘದ ನೂತನ ವಸ್ತ್ರಗಳ ಭೂಷಣ ಮಾಡುತ್ತ ಆರಾಧ್ಯ ದೇವರೊಡನೆ ಆರಾಧಕನ ಏಕಾತ್ಮತೆಯು ಬೇರೆ ಯಾವ ಧರ್ಮದಲ್ಲಿ ಸಿಗಬಲ್ಲುದು?

ನಿಷ್ಪಾಪಿ ಬಾಲಕರು— ಮುದುಕರು— ಸಹ ಮಾಘಮಾಸದಲ್ಲಿ ಆನಂದದಿಂದಿರುತ್ತಾರೆ. ಯುವಕ-ಯುವತಿಯರು ಮಾಘಮಾಸದ ಪುಷ್ಪಗಳ ಶೃಂಗಾರಮಾಡಿ, ಸೃಷ್ಟಿ ಮತ್ತು ಮಾಘದ ಅಮರ ಪ್ರೇಮದ ಪ್ರತೀಕರಾಗಲು, ರಥಸಪ್ತಮಿ ಮಹೋತ್ಸವದಲ್ಲಿ ಭಾಗವಹಿಸುತ್ತಾರೆ. ಯುವಕರ ಉತ್ಸಾಹ ಹಾಗೂ ಒಕ್ಕಟ್ಟು ನೋಡಿ, ಮುದುಕರಲ್ಲಿಯೂ ನವಯೌವನವು ಬರುತ್ತದೆ. ಈ ದಿನ ಇಡೀ ಮಾನವ ಸಮಾಜವು ನರ್ತಿಸುವ ಸೃಷ್ಟಿಯೊಡನೆ ತಲ್ಲೀನವಾಗುವುದನ್ನು ನಾವು ಕಾಣಬಹುದು. ಆದುದರಿಂದ, ಜೀವನದ ಸಕಲಕ್ಷೇತ್ರಗಳಲ್ಲಿ ಈ ಪ್ರಕಾರ ಹಬ್ಬಿರುವ ಆಸೆ, ಉತ್ಸಾಹ, ಒಕ್ಕಟ್ಟುಗಳ ಇನ್ನೊಂದು ಹೆಸರೇ ರಥಸಪ್ತಮಿ. (ಮಾಘ ಮಾಸದ ಇನ್ನೊಂದು ಹಬ್ಬವು 'ಶಿವರಾತ್ರಿ'.)

## ೨. ಪುರಿಯ ಜಗತ್ಪ್ರಸಿದ್ಧ ರಥೋತ್ಸವ

ಕಾಶಿ ಪಟ್ಟಣವು ಅತಿ ಪುರಾತನವಾದುದಾಗಿಯೂ, ಪುರಾತನಕಾಲದಿಂದ ವಿದ್ವಾಂಸರ ಕೇಂದ್ರವಾಗಿಯೂ ಜಗತ್ಪ್ರಸಿದ್ಧವಿದ್ದರೆ, ಪುರಿಯು ಜಗನ್ನಾಥ ದೇವಾಲಯ ಮತ್ತು ರಥೋತ್ಸವದಿಂದ ಲೋಕವಿಖ್ಯಾತವಿದೆ. ಭಾರತದ ರಥೋತ್ಸವಗಳಲ್ಲಿ ಪುರಿಯ ರಥೋತ್ಸವವೇ ಅತ್ಯಂತ ಹೆಸರುವಾಸಿಯಾದುದು.

ಪುರಿಯು ಬಂಗಾಳ-ನಾಗಪುರ ರೈಲ್ವೆ ಲೈನಿನಲ್ಲಿ, ಕಲ್ಕತ್ತೆಯಿಂದ ೩೧೦ ಮೈಲುಗಳ ದೂರದಲ್ಲಿ, ಸಮುದ್ರತೀರದಲ್ಲಿರುವ ಒಂದು ಪಟ್ಟಣ. ರಮ್ಯ ನೋಟವೂ, ಒಳ್ಳೆಯ ಹವೆಯೂ ಇದೆ. ಇದನ್ನು 'ಶ್ರೀಕ್ಷೇತ್ರ'ವೆಂದೂ ಕರೆಯುವರು.

ಪುರಿಯಲ್ಲಿ ಅತಿ ಪ್ರಾಮುಖ್ಯತೆ ಪಡೆದ ದೇವಾಲಯವು ಜಗನ್ನಾಥ. ಇದು, ರೈಲ್ವೆ ಸ್ಟೇಷನಿನಿಂದ ಎರಡು ಮೈಲುಗಳ ದೂರದಲ್ಲಿದೆ. ಇಕ್ಕಡೆಗಳಲ್ಲೂ ಸಂತೆಗಳ ಸಾಲು, ಸ್ತಂಭಗಳು, ಉದ್ದಕ್ಕೆ ನೀಡಿದ ಮೆಟ್ಟಿಲುಗಳು, ಎದುರಲ್ಲಿ ದೇವಾಲಯದ ಶಿಖರಗಳು; ಮಹಾದ್ವಾರ, ದೇವಾಲಯದ ಮುಂದೆ ವರುಷದ ಎಲ್ಲ ದಿನಗಳಲ್ಲೂ ಕಿಕ್ಕಿರಿದಿರುವ ಭಜಕವೃಂದ.

ಜಗನ್ನಾಥ ದೇವಾಲಯವು ಶಿಲ್ಪಕಲೆಯಲ್ಲಿಯೂ ಅಸಾಧಾರಣವಿದೆ. ಭವ್ಯತೆಯೂ ಪ್ರೇಕ್ಷಕನನ್ನು ಬೆರಗುಗೊಳಿಸುವುದು. ಈ ದೇವಾಲಯವನ್ನು ಕಟ್ಟಿಸಿ ಏಳು ನೂರು ವರುಷಗಳು ಕಳೆದುಹೋದುವೆನ್ನುವರು. ಹನ್ನೆರಡನೇ ಶತಮಾನದಲ್ಲಿ ಚುರಂಗದೇವನು ಇದನ್ನು ಕಟ್ಟಿಸಲು ಆರಂಭಿಸಿ, ತನ್ನ ಜೀವಿತಕಾಲದಲ್ಲಿ ಪೂರ್ಣಗೊಳಿಸಲಾರದೆ ಹೋದನು. ಈ ಕಾರ್ಯವನ್ನು ಮುಂದೆ ಅನಂಗ ಭೀಮದೇವನು ಮುಂದುವರಿಸಿ, ಕ್ರಿ. ಶ. ೧೧೯೭ರಲ್ಲಿ ಪೂರ್ಣಗೊಳಿಸಿದನಾಗಿ ಹೇಳುವರು. ದೇವಾಲಯದ ಈ ಕಟ್ಟಡದ ವಿಷಯವಾಗಿ ಇಷ್ಟು ಹೇಳಬಹುದಾದರೂ ಅದರಲ್ಲಿನ ವಿಗ್ರಹದ ಕುರಿತು ಯಾರೂ ಎಣಿಕೆ ಹಾಕಿಲ್ಲ. ಅದು ಅಸಂಖ್ಯಾಕ ವರುಷಗಳಿಂದ ಇರುವುದಾಗಿ ಹೇಳುವರು. ಬೌದ್ಧಕಾಲದಲ್ಲಿಯೂ ಇದರ ಉಲ್ಲೇಖವಿದೆ.

ಜಗನ್ನಾಥ ವಿಗ್ರಹವನ್ನು ಜಗದ್ಗುರು ಆದಿ ಶಂಕರಾಚಾರ್ಯರು ಪುನಪ್ರ್ರತಿಷ್ಠಿಸಿದರು.



ಪುರಿಯ ಜಗನ್ನಾಥ ದೇವಾಲಯದ ರಥೋತ್ಸವ ದೃಶ್ಯ.

ಜಗನ್ನಾಥ ದೇವಾಲಯದ ಆಸುಪಾಸಿನಲ್ಲಿ ಸುಮಾರು ನೂರ ಇಪ್ಪತ್ತು ದೇವಾಲಯಗಳಿವೆ. ಇವುಗಳಲ್ಲಿ ವಿಮಲಾದೇವಿ (ದುರ್ಗಾ) ಲಕ್ಷ್ಮಿ, ಸ್ವರ್ಗದ್ವಾರ, ಶ್ರೀ ಗೋವರ್ಧನ, ಮಾಧವ, ಶ್ವೆತಗಂಗಾ—ಇವು ಮುಖ್ಯವಾಗಿವೆ. ಉಳಿದುವೆಲ್ಲ ಅಷ್ಟು ಪ್ರಸಿದ್ಧವಲ್ಲ.

ಅನೇಕ ತೀರ್ಥಗಳೂ ಅಲ್ಲಿವೆ. ಅವುಗಳಲ್ಲಿ "ನರೇಂದ್ರ ಸರೋವರ"ವು ಹೆಸರುವಾಸಿಯಾಗಿದೆ. ಅಕ್ಷಯ ತೃತಿಯೆಯಲ್ಲಿ, ಶ್ರೀ ಜಗನ್ನಾಥನು ಚಂದನ ಯಾತ್ರೆಗೆ ಹೊರಟಾಗ, ಇಪ್ಪತ್ತೆರಡು ದಿನಗಳ ವರೆಗೆ ಈ ತೀರ್ಥ ದಲ್ಲಿ ಸ್ನಾನಮಾಡುವುದುಂಟು. ಇದು ವರುಷಂಪ್ರತಿ ನಡೆವ ಉತ್ಸವವಾಗಿದೆ.

ಪುರಿಯಲ್ಲಿ ವರುಷಕ್ಕೆ ನಾಲ್ಕು ಮುಖ್ಯ ಉತ್ಸವಗಳಿವೆ. ಅವುಗಳಲ್ಲಿ ಅತಿ ಮುಖ್ಯ ರಥೋತ್ಸವವು, ಜೂನ್ ತಿಂಗಳಲ್ಲಿ ಅಥವಾ ಜುಲೈಯಲ್ಲಿ ಜರಗುವುದು. ವಿಷ್ಣುವಿನ ವಿಗ್ರಹವನ್ನು ಬೃಹದಾಕಾರದ ರಥದಲ್ಲಿರಿಸಿ, ಸಾವಿರಾರು ಜನರು ಆ ರಥವನ್ನೆಳೆದುಕೊಂಡು ಹೋಗುವ ದೃಶ್ಯವು, ಜಗತ್ತಿನ ಪ್ರೇಕ್ಷಣೀಯ ನೋಟಗಳಲ್ಲೊಂದಾಗಿದೆ. ಮುಖ್ಯ ರಥವು ಸುಮಾರು ೪೫ ಅಡಿ ಎತ್ತರವಿದೆ; ೩೫ ಅಡಿ (ಚದರ) ವಿಶಾಲವಿದೆ; ರಥಕ್ಕೆ ನಾಲ್ಕು ಅಟ್ಟವಳಿಗೆಗಳಿವೆ. ಹದಿನಾರು ಚಕ್ರಗಳಿವೆ. ಪ್ರತಿಯೊಂದು ಚಕ್ರದ ವ್ಯಾಸ ಏಳು ಅಡಿಗಳಷ್ಟಿದೆ. ಇಷ್ಟು ದೊಡ್ಡ ರಥವು ಅಥವಾ ಬೇರಾವುದೇ ರೀತಿಯ ವಾಹನವು ಜಗತ್ತಿನಲ್ಲೆಲ್ಲಿಯೂ ಇಲ್ಲ. ಮತ್ತೆ ಎರಡು ರಥಗಳೂ ಅದರ ಹಿಂಬದಿಯಲ್ಲಿರುವುವು. ರಥಕ್ಕೆ ಕಟ್ಟಿದ ಹಗ್ಗವು ಒಂದಡಿಯಷ್ಟು ವ್ಯಾಸವುಳ್ಳುದಿದೆ. ಸುಮಾರು ಹತ್ತು ಸಾವಿರದಷ್ಟು ಜನರು ಈ ರಥವನ್ನೆಳೆವರು. ಎರಡು ಲಕ್ಷಕ್ಕೂ ಮಿಕ್ಕಿದ ಜನಸ್ತೋಮವು ಈ ರಥೋತ್ಸವವನ್ನು ನೋಡುವುದು. ಈ ರಥವು ಚಲಿಸಲು ಅತಿ ವಿಶಾಲವಾದ ರಸ್ತೆಯಿರುತ್ತದೆ.

ಹಲವು ವರ್ಷಗಳ ಹಿಂದೆ, ಈ ರಥೋತ್ಸವಕ್ಕಾಗಿ ನೆರೆದ ಜನರಲ್ಲಿ, ಶ್ರೀ ಜಗನ್ನಾಥನ ದರ್ಶನಕ್ಕೆಂದು ಬಂದ ಕೆಲವರು, ನುಗ್ಗಾಟದಲ್ಲಿ ಮರಣಕ್ಕೀಡಾಗುತಿದ್ದರು. ಕೆಲವರು, ಹಿಂಬದಿಯಿಂದ ದೂಡಲ್ಪಟ್ಟು, ರಥದಡಿಗೆ ಬಿದ್ದು ಮರಣಹೊಂದುತಿದ್ದರು. ಕೆಲವೇ ಅಂಧಶ್ರದ್ಧೆಯವರು, ನೇರಾಗಿ ಸ್ವರ್ಗಕ್ಕೆ ಹೋಗುವೆವೆಂದು ಭ್ರಮಿಸಿ, ರಥದಡಿಗೆ ಅರ್ಪಿಸಿಕೊಂಡ ಉದಾಹರಣೆಗಳೂ, ಅಪವಾದವೆಂಬಂತೆ ಇರಬಹುದು. ಆದರೆ, ಈಗ ಅಂಥ ಅನಾಹುತಗಳಿಗೆಡೆಯಿಲ್ಲ. ಸುವ್ಯವಸ್ಥೆಯಿರುತ್ತದೆ. ತಪ್ಪು ಗ್ರಹಿಕೆಯಿಂದ



ಮೈಸೂರು ಶ್ರೀ ಚಾಮುಂಡೇಶ್ವರಿ ರಥೋತ್ಸವ.
(ರಥವನ್ನೆಳೆವವರಲ್ಲಿ ಶ್ರೀಮನ್ಮಹಾರಾಜರೂ ಒಬ್ಬರಾಗಿರುವರು.)

ಕೆಲವು ಪಾಶ್ಚಾತ್ಯರು, ಜಗನ್ನಾಥನ ರಥದಡಿಗೆ ಮನುಷ್ಯ ಬಲಿಕೊಡಲ್ಪಡುತ್ತಿದೆಯೆಂದು, ವ್ಯರ್ಥ ಬಲಿಗಳನ್ನು—"ಜಗ್ಗರ್ನಾಥನ ಮಹಾ ಚಕ್ರದಡಿ ಬಲಿಗೊಡುವರು" ಎಂದು ಉಪಮಾರೂಪವಾಗಿ ಹೇಳುವುದುಂಟು. ಆದರೆ, ಅದು ಕೇವಲ ಭ್ರಮೆ. ವಿಷ್ಣು ಪೂಜೆಯಲ್ಲಿ ಇಂಥ "ಬಲಿ" ಅಥವಾ "ಆಹುತಿ"ಗಳಿಗೆ ಸ್ಥಾನವಿಲ್ಲ.

ಜಗನ್ನಾಥ ದೇವಾಲಯದ ಒಳ ಪ್ರಾಂಗಣವು ೪೦೦ ಅಡಿ ಉದ್ದ, ೩೦೦ ಅಡಿ ಅಗಲವಿದೆ. ಒಳಗೆ, ಸುತ್ತಲೂ ಅನೇಕ ಗುಡಿಗಳಿವೆ.

ಪುರಿ ದೇವಾಲಯದ ವರ್ಷದ ಉತ್ಪನ್ನವು ಹತ್ತು ಲಕ್ಷ ರೂಪಾಯಿಗಳಿಗೂ ಮಿಕ್ಕಿದೆ. ಅನೇಕ ವೇಳೆ ಹದಿನೈದು ಲಕ್ಷಕ್ಕೂ ಮೇಲ್ಪಟ್ಟು ಎಣಿಕೆ ಮಾಡಲ್ಪಟ್ಟಿದೆ.

ಪುರಿಯಲ್ಲಿ, ಎಲ್ಲ ಹಿಂದೂಗಳೂ, ಭೇದಭಾವವಿಲ್ಲದೆ ದೇವಾಲಯವನ್ನು ಪ್ರವೇಶಿಸಬಹುದು. ಅಲ್ಲಿಯ ಮಹಾಪ್ರಸಾದವು, ಹೊರಗೆ, ಆ ಜಗ್ಗಿ ಇರುವ ಅಂಗಡಿಗಳಲ್ಲಿ ವಿಕ್ರಯಿಸಲ್ಪಡುತ್ತಿದೆ. ೫೦೦ ಕ್ಕಿಂತಲೂ ಹೆಚ್ಚಿಗೆ ಇರುವ ಮಡಕೆಗಳಲ್ಲಿ, ಒಂದು ಕೇಂದ್ರ ಒಲೆಯಿಂದ ಉಷ್ಣವು ತಗಲಿ—ಈ ಅನ್ನ ಮತ್ತು ಪದಾರ್ಥಗಳು ಬೇಯುತ್ತವೆ. ಆ ಮಡಕೆಗಳನ್ನೇ ಪರಿಶೆಯವರು ಕೊಂಡುಕೊಳ್ಳುತ್ತಾರೆ.

ಜಗತ್ತಿನ ಅತಿ ದೊಡ್ಡ ಪಾಕಶಾಲೆಯು ಪುರಿಯ ಜಗನ್ನಾಥ ದೇವಾಲಯದಲ್ಲಿರುವುದು. ಸಾಮಾನ್ಯವಾಗಿ, ದಿನಂಪ್ರತಿ ಸುಮಾರು ೧೦,೦೦೦ ಜನರಿಗೆ ಇಲ್ಲಿಂದ ಭೋಜನದ ವಿತರಣೆಯಾಗುತ್ತಿರುವುದು. ಜಾತ್ರೆಗಳ ಸಮಯದಲ್ಲಿ ಒಂದು ಲಕ್ಷದ ವರೆಗೂ ಜನರಿಗೆ ಅನ್ನ ಬೇಯಿಸಬೇಕಾಗುವುದು. ಸುಮಾರು ೨೫೦ ಮಂದಿ ಅಡುಗೆಭಟ್ಟರೂ ಅವರ ಸಹಾಯಕರೂ ಕೂಡಿ ೭೫೦ ಮಂದಿ, ಈ ಭೋಜನ ತಯಾರಿಸುವರು.

ರಥೋತ್ಸವವಲ್ಲದೆ, ಚಂದನ ಯಾತ್ರೆ, ಝೂಲಯಾತ್ರೆ, ಜನ್ಮಾಷ್ಟಮಿ ಮೊದಲಾದ ಜಾತ್ರೆಗಳೂ ಅಲ್ಲಿ ಜರಗುತ್ತಿವೆ.

ಪುರಿಯ ಮಹಾರಾಜರೂ ಇಲ್ಲಿ ಬಂದು, ತಮ್ಮ ಸೇವೆಯೊಪ್ಪಿಸುವರು. ರಥದ ನೆಲವನ್ನು ಅವರೇ ಸ್ವತಃ, ಕಸಬರಿಗೆ ಹಿಡಿದು ಗುಡಿಸುವರು.

## ೩. ಮಂಗಳೂರು ಶ್ರೀ ವೆಂಕಟರಮಣ ದೇವಸ್ಥಾನ

ದಕ್ಷಿಣ ಕನ್ನಡ ಜಿಲ್ಲೆಯ ಹಲವು ದೇವಾಲಯಗಳಲ್ಲಿ ನಡೆವ ರಥೋತ್ಸವಗಳಲ್ಲಿ ಮಂಗಳೂರು ಶ್ರೀ ವೆಂಕಟರಮಣ ದೇವಸ್ಥಾನದ ರಥೋತ್ಸವಕ್ಕೊಂದು ವಿಶೇಷ ಆಕರ್ಷಣೆಯಿದೆ. ಜಿಲ್ಲೆಯ ಮುಖ್ಯ ಪಟ್ಟಣದಲ್ಲಿ, ನಗರದ ಕೇಂದ್ರದಲ್ಲಿದ್ದು ಈ ದೇವಸ್ಥಾನವು, ದೇವಾಲಯದ ಹೊರಗೇ ಚಾಚಿರುವ ನೇರಾದ ರಸ್ತೆಯಲ್ಲೆ ರಥಾರೋಹಣವೂ, ರಾತ್ರೆ ಕಾಲದ ಉತ್ಸವಗಳೂ ನಡೆವುದರಿಂದ ಒಂದು ಅಪೂರ್ವ ಶೋಭೆಯಿರುತ್ತದೆ. ಮಾಘ ಶುದ್ಧ ತದಿಗೆಗೆ ಧ್ವಜಾರೋಹಣದಿಂದಾರಂಭವಾಗಿ, ಸಪ್ತಮಿಯಂದು ಬ್ರಹ್ಮ ರಥೋತ್ಸವ ಜರಗಿ, ಮರುದಿನ ಅವಭೃತವಾಗುವುದು. ಈ ಆರು ದಿನಗಳಲ್ಲೂ ನಗರದಲ್ಲಿ ಅಪೂರ್ವ ಆನಂದ-ಉತ್ಸಾಹಗಳಿದ್ದು, ಪುರಾಣಗಳಲ್ಲಿ ವರ್ಣಿತ



ಮಂಗಳೂರು ಶ್ರೀ ವೆಂಕಟರಮಣ ದೇವರ
ಗರ್ಭಗುಡಿಯೊಳಗಿನ ಸುಂದರ ವಿಗ್ರಹ.

ವಾದ ಆ ಮಾಘ ಮಾಸದ ಮಹೋಲ್ಲಾಸವು ಸಾರ್ವತ್ರಿಕವಾಗಿ ಗೋಚರ ವಾಗುತ್ತಿರುವುದು. ಪ್ರತಿ ದಿನವೂ ಸಾಯಂಕಾಲ ೫ಕ್ಕೆ ಸಮಾರಾಧನೆ ನಡೆ ವುದು. ಬೆಳಗ್ಗೆ ಮಹಾಪೂಜೆ, ಆ ಮೇಲೆ ಯಜ್ಞಾರಂಭ, ಬೆಳ್ಳಿಪಲ್ಲಂಕಿಯಲ್ಲಿ ಹಗಲೋತ್ಸವ, ಆ ಮೇಲೆ ಸಮಾರಾಧನೆ ಹೀಗೆ ಕಾರ್ಯಕ್ರಮಗಳು ಪ್ರಥ ಮದ ಮೂರು ದಿನಗಳಲ್ಲೂ, ನಾಲ್ಕನೇ ದಿನ ಸಣ್ಣ ರಥೋತ್ಸವದಂದು, ಬೆಳಗ್ಗಿನ ಕಾರ್ಯಕ್ರಮಗಳ ನಂತರ ಸಮಾರಾಧನೆ, ಮೃಗ ಬೇಟೆ ಉತ್ಸವ, ಸಣ್ಣ ರಥೋತ್ಸವ ಮತ್ತು ಪ್ರಾಸಾದೋತ್ಸವ, ವಸಂತ ಪೂಜೆಯೂ ಐದನೇ ದಿನ ಬೆಳಗ್ಗೆ ಪಂಚಾಮೃತ ಅಭಿಷೇಕ, ಪುಳಕಾಭಿಷೇಕ, ಗಂಗಾಭಿಷೇಕ ಯುಕ್ತ ಮಹಾಭಿಷೇಕವೂ, ಆ ಮೇಲೆ ಯಜ್ಞ, ಮಹಾಬಲಿ, ಸಾಯಂಕಾಲ ೫-೩೦ಕ್ಕೆ ಬ್ರಹ ರಥಾರೋಹಣ, ೭-೩೦ಕ್ಕೆ ಸಮಾರಾಧನೆ, ನಡುರಾತ್ರಿ ೧ಕ್ಕೆ ರಥೋತ್ಸವ, ಅನಂತರ ವಸಂತ ಪೂಜೆ—ಮುಂಜಾನೆ ೩ಕ್ಕೆ ಮುಗಿದು, ಮರುದಿನ ಬೆಳಗ್ಗೆ (ಓಕುಳಿಯ ದಿನ) ೮-೩೦ಕ್ಕೆ ದ್ವಾರ ಪೂಜೆ, ೯ಕ್ಕೆ ಚೂರ್ಣೋತ್ಸವ, ವಸಂತ ಪೂಜೆ, ಯಜ್ಞ ವಿಸರ್ಜನೆ, ೧೧ಕ್ಕೆ ಅವಭೃತೋ ತ್ಸವ, ಅಪರಾಹ್ನ೫-೪೫ಕ್ಕೆ ಧ್ವಜವನ್ನಿಳಿಸುವುದು, ಮಹಾ ಪೂಜೆ, ಸಂಪ್ರೋ ಕ್ಷಣೆ, ರಾತ್ರಿ ೯ಕ್ಕೆ ಸಣ್ಣ ರಥೋತ್ಸವ—ಈ ಕಾರ್ಯಕ್ರಮಗಳಿವೆ.

ಈ ದೇವಾಲಯದ ಉತ್ಸವಗಳೆಲ್ಲವೂ ವಿಧ್ಯುಕ್ತವಾಗಿಯೂ ಶಿಸ್ತಿ ನಿಂದಲೂ ನಡೆವುವು. ಸುಮಾರು ೪೦೦-೫೦೦ ಸ್ವಯಂಸೇವಕರು ಸಮಾ ರಾಧನಾ ಕಾಲದಲ್ಲಿ ಸೇವೆಯೊಪ್ಪಿಸುವರು. ಮೊದಲನೇ ಮೂರು ದಿನಗಳಲ್ಲಿ ದಿನಂಪ್ರತಿ ಎಂಟರಿಂದ ಒಂಭತ್ತು ಸಾವಿರ ಜನರೂ, ನಾಲ್ಕನೇ ದಿನ ಹನ್ನೆ ರಡು ಸಾವಿರ ಜನರೂ, ರಥೋತ್ಸವದಂದು ಹದಿನೈದು ಸಾವಿರಕ್ಕೂ ಮಿಕ್ಕಿದ ಜನರೂ ಸಮಾರಾಧನೆಯಲ್ಲಿ ಭಾಗವಹಿಸುವರು. ಸ್ವಚ್ಛತೆ, ಬಳಸುವ ವಿಧಾನ, ಶಿಸ್ತು, ಸ್ವಯಂಸೇವಕರ ಕಾರ್ಯಕ್ಷಮತೆ—ಇವುಗಳಲ್ಲಿ ಶ್ರೀ ವೆಂಕ ಟ್ರಮಣ ದೇವಸ್ಥಾನವು ಅನೇಕ ಇಂಥ ಮಹೋತ್ಸವಗಳಲ್ಲಿ ನಡೆವ ಸಮಾ ರಾಧನೆಗಳಿಗೆ ಮಾದರಿಯಾಗಿರುತ್ತದೆಂದರೆ ಅತಿಶಯೋಕ್ತಿಯಾಗಲಾರದು.

ಶ್ರೀ ವೆಂಕಟ್ರಮಣ ದೇವಾಲಯದ ಇತಿಹಾಸವನ್ನು ಕುರಿತು, ಇನ್ನೊಮ್ಮೆ ಇನ್ನೊಂದು ಮಹಿಯಲ್ಲಿ ವಿವರಿಸಲಾಗುವುದು. ಈ ಪುಸ್ತಕದಲ್ಲಿ ಅದರ ಆಡಳಿತದಲ್ಲಿ ಸೇವೆ ಸಲ್ಲಿಸಿದವರ ಹೆಸರುಗಳನ್ನಷ್ಟೆ ವಿವರಿಸಿರುವೆವು. ಮಂಗಳೂರಲ್ಲಿ, ಗೌಡಸಾರಸ್ವತ ಬ್ರಾಹ್ಮಣರ ಪ್ರಥಮ ದೇವಸ್ಥಾನವು ಶ್ರೀ

ಮಹಾಮ್ಮಾಯಿ ದೇವಸ್ಥಾನವಾಗಿರುತ್ತದೆ. ಬಾಬಪ್ಪೈ ಮನೆತನದವರು ಶ್ರೀ ಮಹಾಮ್ಮಾಯಿ ದೇವಸ್ಥಾನದ ಆಡಳಿತದಲ್ಲಿಯೂ ಭಾಗವಹಿಸಿದ್ದರೆಂದೂ, ಮುಂದೆ, ಆ ದೇವಸ್ಥಾನದಿಂದ ಅನತಿ ದೂರದಲ್ಲಿ ಶ್ರೀ ವೆಂಕಟ್ರಮಣ ದೇವಸ್ಥಾನವು ಸ್ಥಾಪಿಸಲ್ಪಟ್ಟ ನಂತರ ಈ ಮನೆತನದವರು ಈ ದೇವಸ್ಥಾನದ ಪ್ರಥಮ ಮೊಕ್ತೇಸರ ಸ್ಥಾನದಲ್ಲಿದ್ದರೆಂದೂ ತಿಳಿದು ಬರುತ್ತದೆ. ಓರ್ವ ಬೈರಾಗಿಯು ಶ್ರೀ ವೀರ ವೆಂಕಟೇಶನ ಮೂರ್ತಿಯನ್ನು ತಂದು ಕೊಟ್ಟು ದನ್ನು ವಿಧ್ಯುಕ್ತವಾಗಿ ಶ್ರೀ ಕಾಶಿ ಮಠಾಧೀಶ ಶ್ರೀ ವಿಬುಧೇಂದ್ರತೀರ್ಥಸ್ವಾಮಿಜಿಯವರು ಪ್ರತಿಷ್ಠಿಸಿದರೆಂದೂ ಒಂದು ಉಲ್ಲೇಖವಿದೆ. ಈ ಮೂರ್ತಿಯು ಪೂರ್ವದಲ್ಲೇ ಅಲ್ಲಿರುತಿದ್ದ ಮೂರ್ತಿಯನ್ನು ಪ್ರತಿಷ್ಠಿಸಿದುದಾರು, ಯಾವಾಗ ಎಂಬ ಸ್ಪಷ್ಟ ದಾಖಲೆಗಳು ಇನ್ನೂ ದೊರಕಿಲ್ಲ.

## ಟ್ರಸ್ಟಿಗಳು—ಮೆನೇಜರರು.

ಮುಂದೆ, ಬಾಬಪ್ಪೈ ಮನೆತನದ ಸಾಂತಪ್ಪೈ ಎಂಬವರು ಶಾಲಿವಾಹನ ಶಕ ೧೭೬೨ (ಸನ್ 1840) ರಲ್ಲಿ ಪಾರುಪಾತ್ಯಗಾರರಾಗಿದ್ದರೆಂಬ ದಾಖಲೆಯನ್ನು ನಾವು ಕಂಡಿರುತ್ತೇವೆ. ಮುಂದೆ ಕೊಂಚಾಡಿ ವೆಂಕಟೇಶ ಶೆಣೈಯವರು ಕ್ರಿ. ಶ. ೧೮೯೬ರ ವರೆಗೆ ಮೊಕ್ತೇಸರರಾಗಿದ್ದರು. ೧೮೯೬ರಿಂದ ೧೯೧೫ರ ವರೆಗೆ ಶ್ರೀ। ಮಂಗಳೂರು ರಂಗಪ್ಪೈಯವರು ಮೊಕ್ತೇಸರರಾಗಿದ್ದರು. ಈ ವರ್ಷದಿಂದ ಆಯ್ಕೆ ಮೂಲಕವೇ 'ಟ್ರಸ್ಟಿ'ಗಳನ್ನು ನೇಮಿಸುವ ರೂಢಿಯು ಜಾರಿಗೆ ಬಂತು. ಪ್ರತಿ ಕಾರ್ತಿಕ ಮಾಸದಲ್ಲಿ ಹತ್ತು ಸಮಸ್ತರ ಸಭೆಯಲ್ಲಿ ಈ ಆಯ್ಕೆಯಾಗುತಿತ್ತು. ಸಾಹುಕಾರ ಪಾಂಡುರಂಗ ಲಕ್ಷ್ಮಣ ಪೈ, ಶ್ರೀ। ಯು.ಅನಂತ ನಾಯ್ಕ ಮತ್ತು ಶ್ರೀ। ಎಂ. ರಂಗ ಪೈಯವರು ಟ್ರಸ್ಟಿಗಳಾಗಿ, ಅವರಲ್ಲಿ ಮೂರನೇಯವರು ಮೆನೇಜಿಂಗ್ ಟ್ರಸ್ಟಿಗಳಾದರು. ಇವರು ೧೯೧೫ರ ವರೆಗೆ ಆಡಳಿತ ನೋಡಿದರು. ೧೯೧೫ರಿಂದ ೧೯೨೪ರ ವರೆಗೆ ವಕೀಲ ಶ್ರೀ। ಸುಜೀರ ನರಸಿಂಗ ನಾಯ್ಕರು, ಶ್ರೀ। ಮಿಜಾರು ರಾಮಕೃಷ್ಣ ಪೈಗಳವರು ಮತ್ತು ಶ್ರೀ। ಮಣೇಲ ವೆಂಕಟ್ರಾಯ ನಾಯ್ಕರು. ದೇವಾಲಯದ ಕೆಲಸಗಳಲ್ಲಿ ಮುಂದಾಳಾಗಿರಲು 'ಕೌನ್ಸಿಲ್ ಫೋರ್‌ಮೇನ್' ನೇಮಕವೂ ಇವೇ ಆಡಳಿತದಲ್ಲಿ ಆರಂಭವಾಯಿತು. ಅಂಥ ಪ್ರಥಮ "ಫೋರ್‌ಮೇನ್' ಆಗಿ ಶ್ರೀ। ಎ. ಜೆ. ರಾವ್ ಕವಿಯವರು ಆರಿಸಲ್ಪಟ್ಟರು.

ಶ್ರೀ| ಸುಜೀರ ನರಸಿಂಗ ನಾಯ್ಕರು ರಾಜಿನಾಮೆ ಕೊಡಲು (1924) ಉಳಿದಿಬ್ಬರು ೧೯೨೮ರ ತನಕ ಟ್ರಸ್ಟಿಗಳಾಗಿ ಮುಂದುವರಿದರು. ೧೯೨೮ರಲ್ಲಿ ಹಿಂದೂ ರಿಲಿಜಿಯಸ್ ಎಂಡೋವ್ಮೆಂಟ್ ಬೋರ್ಡಿನವರು ಈ ದೇವಾಲಯದ ಆಡಳಿತದ ಬಗ್ಗೆ ಒಂದು ಯೋಜನೆ ತಯಾರಿಸಿದರು. ಆದರಂತೆ, ಗೌಡ ಸಾರಸ್ವತ ಬ್ರಾಹ್ಮಣ ಸಮಾಜಕ್ಕೆ ಸೇರಿದ ಮೂವರು ಐದು ವರ್ಷಗಳಿಗೊಮ್ಮೆ ಟ್ರಸ್ಟಿಗಳಾಗಿ ನೇಮಿಸಲ್ಪಡುವಂತೆಯೂ, ದೇವಾಲಯಕ್ಕೆ ಸಂಬಂಧಿಸಿದ ಆಡಳಿತ ನೋಡುವ ಓರ್ವ ಮೆನೇಜರರು ನೇಮಿಸಲ್ಪಡುವಂತೆಯೂ ವ್ಯವಸ್ಥೆ ಮಾಡಿದರು. ಈ ಹೊಸ ಯೋಜನೆಯಂತೆ, ಪ್ರಥಮದ ಟ್ರಸ್ಟಿಗಳ ಕೂಟದಲ್ಲಿ ಶ್ರೀ| ಬಿ. ವೆಂಕಟ್ರಾವ ಬಾಳಿಗ (ವಕೀಲ), ಶ್ರೀ| ನಗರ ನರಸಿಂಹ ಶೆಣ್ಯೆ ಮತ್ತು ಸಾಹುಕಾರ ಗಣೇಶ ಶ್ರೀನಿವಾಸ ಪೈ—ಅವರು ಟ್ರಸ್ಟಿಗಳಾಗಿಯೂ, ರಾವ್ ಸಾಹೇಬ್ ಹುಂಡಿ ಮಾಧವ ಕಾಮತರವರು (ನಿವೃತ್ತ ಅಸಿಸ್ಟಾಂಟ್ ಕಮಿಶನರರು) ಪ್ರಥಮ ಮೆನೇಜರರಾಗಿಯೂ ನೇಮಕ ಹೊಂದಿದರು. ಶ್ರೀ| ಕಾಮತರು ೧೯೩೩ರ ವರೆಗೆ ಇದ್ದು, ರಾಜಿನಾಮೆಯಿತ್ತರು. ಎರಡನೇ ಮೆನೇಜರರಾಗಿ ಶ್ರೀ| ಎನ್. ಎನ್. ರಾವ್‌ರವರು ನೇಮಕ ಹೊಂದಿ ೧೯೪೦ರ ವರೆಗೆ ಇದ್ದರು. ■ ಮೇಲೆ ಶ್ರೀ| ಯು. ಅನಂತ ಕಿಣಿ, ವಕೀಲ ಅವರು ನೇಮಕ ಹೊಂದಿ, ೧೯೪೨ರಲ್ಲಿ ಮೃತಿ ಹೊಂದಿದುದರಿಂದ, ಅವರ ಸ್ಥಾನದಲ್ಲಿ ಶ್ರೀ| ಎಂ. ಬಾಬುರಾಯ ಪ್ರಭು, ಬಿ. ಎ. ಅವರು (ಆ ಕಾಲದಲ್ಲಿ ಮೂಲ್ಕಿ ಶ್ರೀ ವೆಂಕಟರಮಣ ದೇವಸ್ಥಾನದ ಮೆನೇಜರರಾಗಿದ್ದವರು) ಮಂಗಳೂರು ದೇವಸ್ಥಾನದ ಮೆನೇಜರರಾಗಿ ನೇಮಿಸಲ್ಪಟ್ಟರು. ಶ್ರೀ| ಪ್ರಭುಗಳವರು ೧೯೫೦ರ ವರೆಗೆ ಮೆನೇಜರರಾಗಿದ್ದು, ಆ ವರ್ಷ ರಾಜಿನಾಮೆಯಿತ್ತ ನಂತರ, ಶ್ರೀ| ಎನ್. ಎನ್. ರಾವ್‌ರವರು ಎರಡನೇ ಸಲ ಮೆನೇಜರರಾಗಿ ನೇಮಕ ಹೊಂದಿ, ಈಗಲೂ ಆ ಸ್ಥಾನದಲ್ಲಿರುವರು.

೧೯೩೪ರಲ್ಲಿ, ಶ್ರೀ| ಬಿ. ವೆಂಕಟ್ರಾಯ ಬಾಳಿಗ, ಅಡ್ವೊಕೇಟ್ ಅವರು ತಮ್ಮ ಟ್ರಸ್ಟಿ ಸ್ಥಾನಕ್ಕೆ ರಾಜೀನಾಮೆಯಿತ್ತರು. ಶ್ರೀ| ಮಣೇಲ ಅಣ್ಣಪ್ಪ ನಾಯ್ಕರವರು ಅವರ ಸ್ಥಾನದಲ್ಲಿ ಟ್ರಸ್ಟಿಗಳಾಗಿ ನೇಮಕವಾದರು. ೧೯೩೬ರಲ್ಲಿ ಶ್ರೀ| ನಗರ ನರಸಿಂಹ ಶೆಣ್ಯೆ ಮತ್ತು ಶ್ರೀ| ಮಂಗಳೂರು ಗಣೇಶ ಶ್ರೀನಿವಾಸ ಪೈಯವರ ಟ್ರಸ್ಟಿ ಸ್ಥಾನದ ಅವಧಿಯು ಕಳೆಯಲು, ಶ್ರೀ| ನಗರ ರಮಾನಾಥ ಶೆಣ್ಯೆ ಮತ್ತು ಶ್ರೀ| ಉಳ್ಳಾಲ ಸುಬ್ರಾಯ

## ಮಂಗಳೂರು ಶ್ರೀ ವೆಂಕಟರಮಣ ದೇವಸ್ಥಾನದ ಟ್ರಸ್ಟಿಗಳು.



ಶ್ರೀ ಜಿ. ಎಸ್. ನಗರ್ಕಾರ್,
ಬಿ.ಎ., ಬಿ.ಎಲ್., ಎಡ್ವೊಕೇಟ್.



ಶ್ರೀ ಮಣೇಲ ಶ್ರೀನಿವಾಸ ನಾಯ್ಕ,
ಮುನಿಸಿಪಲ್ ಕೌನ್ಸಿಲರ್.



ಶ್ರೀ ತಲಪಾಡಿ ಅಣ್ಣಪ್ಪ ಸುಬ್ರಾಯ ನಾಯ್ಕ,
ಪೋರ್ಟ್ ಟ್ರಸ್ಟ್ ಮೆಂಬರರು.



ಶ್ರೀ ಕಾಶೀಮಠಾಧೀಶ ಶ್ರೀಮತ್ ಸುಧೀಂದ್ರತೀರ್ಥ ಶ್ರೀಪಾದಂಗಳವರು.

ನಾಯ್ಕರವರು ಟ್ರಸ್ಟಿಗಳಾಗಿ ಬಂದರು; ಇವರು ೧೯೩೮ರಲ್ಲಿ ರಾಜೀನಾಮೆ ಯಿತ್ತರು—ಮತ್ತು ಇವರಿಬ್ಬರ ಸ್ಥಾನದಲ್ಲಿ ಡಾ| ಕೆ. ಗಿರಿಧರರಾವ್ ಮತ್ತು ಶ್ರೀ| ಪಿ. ನಾರಾಯಣ ಶೆಣೈಯವರು ಬಂದರು. ೧೯೩೮ರಲ್ಲಿ ಶ್ರೀ| ಮಣೇಲ ಅಣ್ಣಪ್ಪ ನಾಯ್ಕರು ತಮ್ಮ ಸ್ಥಾನಕ್ಕೆ ರಾಜೀನಾಮೆ ಕೊಟ್ಟರು; ಅದನ್ನನು ಸರಿಸಿ ಡಾ| ಗಿರಿಧರ ರಾಯರೂ ನಾರಾಯಣ ಶೆಣೈಯವರೂ ರಾಜೀನಾಮೆ ಯಿತ್ತರು. ಈ ಮೂವರ ಸ್ಥಾನದಲ್ಲಿ ಈ ಕೆಳಗಿನಂತೆ ಹೊಸ ನೇಮಕಗ ಳಾದುವು: (೧) ಸಾಹುಕಾರ ಪದ್ಮನಾಭ ರಘುನಾಥ ಪೈ. (೨) ಸಾಹುಕಾರ ಎಮ್. ವೆಂಕಟೇಶ ಪೈ. (೩) ಶ್ರೀ| ಅಮ್ಮೆಂಬಳ ದಾಮೋದರ ಪೈ, ಅಡ್ವೊ ಕೇಟ್ (ಈಗ ಕೆನರಾ ಬೇಂಕಿನ ಚೆಯರ್ಮನ್ ಹಾಗು ಸುಪರ್‌ವೈಝಿಂಗ್ ಡೈರೆಕ್ಟರರು.) ಇವರ ಪೈಕಿ ಶ್ರೀ| ದಾಮೋದರ ಪೈಗಳವರು ೧೯೧೧ರಲ್ಲಿ ನಿವೃತ್ತಿಯನ್ನಪೇಕ್ಷಿಸಿದರು, ಮತ್ತು ಶ್ರೀ| ಜಿ. ಎಸ್. ನಗರ್ಕರ, ಅಡ್ವೊ

ಕೇಟ್, ಅವರು ನೇಮಕವಾದರು. ೧೯೪೪ರಲ್ಲಿ ಸಾಹುಕಾರ ವೆಂಕಟೇಶ ಪೈಗಳವರು ರಾಜೀನಾಮೆಯಿತ್ತರು; ಶ್ರೀ। ಎಮ್. ವೆಂಕಟ್ರಾಯ ಕಾಮತ್, ಅಡ್ವೊಕೇಟ್—ಅವರು ಟ್ರಸ್ಟಿಗಳಾಗಿ ನೇಮಿತರಾದರು. ೧೯೪೭ರಲ್ಲಿ ಸಾಹುಕಾರ ಪದ್ಮನಾಭ ರಘುನಾಥ ಪೈಗಳವರು ನಿವೃತ್ತಿಹೊಂದಿ, ಅವರ ಸ್ಥಾನದಲ್ಲಿ ಶ್ರೀ। ತಲಪಾಡಿ ಅಣ್ಣಪ್ಪ ಸುಬ್ರಾಯ ನಾಯ್ಕರು ಟ್ರಸ್ಟಿಗಳಾದರು. ಶ್ರೀ। ಜಿ. ಎಸ್. ನಗರ್ಕರರು, ಎರಡನೇ ಬಾರಿಯೂ ಟ್ರಸ್ಟಿಗಳಾಗಿ ಮುಂದುವರಿದು, ಈಗಲೂ ಆ ಸ್ಥಾನದಲ್ಲಿರುತ್ತಾರೆ. ಶ್ರೀ। ಟಿ. ಅಣ್ಣಪ್ಪ ಸುಬ್ರಾಯ ನಾಯ್ಕರೂ ಎರಡನೇ ಬಾರಿ ಟ್ರಸ್ಟಿ ಸ್ಥಾನದಲ್ಲಿ ಮುಂದುವರಿದಿದ್ದಾರೆ. ೧೯೫೩ರಲ್ಲಿ ಶ್ರೀ। ಎಮ್. ವೆಂಕಟ್ರಾಯ ಕಾಮತರವರ ಟ್ರಸ್ಟಿಶಿಪ್ ಅವಧಿ ಮುಗಿದ ಮೇಲೆ, ಶ್ರೀ। ಮಣೇಲ ಶ್ರೀನಿವಾಸ ನಾಯ್ಕರು ಟ್ರಸ್ಟಿಗಳಾಗಿ ನೇಮಕಹೊಂದಿರುವರು.

## ದೇವಾಲಯದಲ್ಲಿ ಸುಧಾರಣೆಗಳು



ಶ್ರೀ। ಉಳ್ಳಾಲ ರಾಮನಾಯ್ಕರು.

ದೇವಾಲಯದಲ್ಲಿ ಸುಮಾರು ಇಪ್ಪತ್ತೈದು ವರ್ಷಗಳ ಹಿಂದೇ, ಸ್ವಯಂಸೇವಕ ವ್ಯವಸ್ಥೆ ಆರಂಭವಾಯಿತು ೧೯೩೪ರಲ್ಲಿ, ಕೆರೆಗಳೂ, ಸುತ್ತಲಿನ ವಿಶಾಲ ಕಟ್ಟಡವೂ ಪೂರೈಸಲ್ಪಟ್ಟವು. ೧೯೩೫ರಲ್ಲಿ, ಹಳೇ ಅಗ್ರಶಾಲೆಯನ್ನು ದೂರಕ್ಕೊಯ್ದು, ಉತ್ತರ ಪಾರ್ಶ್ವದ ಮಹಡಿಯ ಕಟ್ಟಡವು ಕಟ್ಟಿಸಲ್ಪಟ್ಟಿತು. ೧೯೩೮ರಲ್ಲಿ, ಪೂರ್ವ ಪಾರ್ಶ್ವದ ಯಜ್ಞಮಂಟಪದ ವಿಶಾಲ ಜಗಲಿಯೂ ಮಹಡಿಯೂ ಪೂರ್ಣಗೊಂಡುವು. ಅಲ್ಲಿ, ಮೊದಲು ವೈದಿಕರ ಮನೆಗಳಿದ್ದುವು. ಅವುಗಳನ್ನು ಹಿಂದಕ್ಕೊಯ್ಯಲಾಯಿತು. ೧೯೩೮ರಲ್ಲಿ, ಟ್ರಸ್ಟಿಗಳಿಗೆ

ಸಹಾಯಕ ಸಮಿತಿಯಾಗಿ 'ಎಡ್ವೈರ್ಸುರಿ' ಸಮಿತಿಯು ಯೋಜನೆಯಾಯಿತು. ದೇವಾಲಯದ ಎದುರು ಪಾರ್ಶ್ವದ, ಎರಡು ಮಹಡಿಗಳ ಕಟ್ಟಡವು ೧೯೫೦ರಲ್ಲಿ, ರೂ. ೪೩,೦೦೦ ವ್ಯಯದಿಂದ ರಚಿಸಲ್ಪಟ್ಟು, ಅದರಲ್ಲಿ, ಶ್ರೀಮತ್ ಸುಧೀಂದ್ರತೀರ್ಥ ಸ್ವಾಮಿಯವರು "ಸುಕೃತೀಂದ್ರ ಸಭಾಸದನ"ದ ಉದ್ಘಾಟನೆ ಮಾಡಿದರು. ಆ ಕಾಲದಲ್ಲೇ ಶ್ರೀ ಗೋಕರ್ಣ ಮಠಾಧೀಶ ಶ್ರೀಮತ್ ದ್ವಾರಕಾನಾಥತೀರ್ಥರೂ ಶ್ರೀ ಕಾಶಿಮಠಾಧೀಶ ಶ್ರೀಮತ್ ಸುಧೀಂದ್ರತೀರ್ಥರೂ ಭಾಗವಹಿಸಿ ಸಹಸ್ರಕುಂಭಾಭಿಷೇಕ ನಡೆಯಿತು.

ಇಪ್ಪತ್ತೈದು ವರ್ಷಗಳಿಂದ ಶ್ರೀ ವೆಂಕಟರಮಣ ದೇವಸ್ಥಾನದವರು ನಿಗಮಾಗಮ ಪಾಠಶಾಲೆಯನ್ನು, ವೇ| ಮೂ| ಮಂಜೇಶ್ವರ ಕೇಶವ ಭಟ್ಟರವರ ನೇತೃತ್ವದಲ್ಲಿ ನಡೆಸುತ್ತ ಬರುತ್ತಿರುವರು. ಈ ಶಾಲೆಯಲ್ಲಿ ಪುರೋಹಿತರಿಗೆ ತರಬೇತಿ ಕೊಡಲಾಗುತಿದ್ದು, ವಿದ್ಯಾರ್ಥಿಗಳ ಬಗ್ಗೆ ಭೋಜನ ಮತ್ತು ವಸತಿಗೃಹದ ಏರ್ಪಾಡೂ ಇದೆ. ಶ್ರೀ ಸ್ವಾಮಿಯವರು, ತೇರ್ಗಡೆ ಹೊಂದಿದವರಿಗೆ ಶಿಫಾರಸು ಪತ್ರಗಳನ್ನು ಕೊಡುವರು. ಈ ಪಾಠಶಾಲೆಯನ್ನು ನಡೆಸಲು ಒಂದು ಆಡಳಿತ ಸಮಿತಿಯಿದ್ದು, ಈ ಸಮಿತಿಗೆ ಶ್ರೀ| ಉಳ್ಳಾಲ ರಾಮನಾಯ್ಕರು ಚೆಯರ್ಮನರಾಗಿಯೂ, ಶ್ರೀ| ಎಮ್. ಬಾಬುರಾಯ ಪ್ರಭುಗಳವರು ಗೌರವ ಮೆನೇಜರರಾಗಿಯೂ ಇರುವರು ಶ್ರೀಗಳಾದ ಕಸ್ತೂರಿ ಶೇಷಗಿರಿ ಪೈ, ಎಮ್. ಕೃಷ್ಣ ಪ್ರಭು, ಯು. ವಾಸುದೇವ ಶೆಣೈ, ಮತ್ತು ವೇ| ಮೂ| ಎಮ್. ಗೋಪಾಲ ಭಟ್—ಇವರು ಸದಸ್ಯರಾಗಿರುವರು. ಶ್ರೀನಿವಾಸ ಸಂಸ್ಕೃತ ಪಾಠಶಾಲೆಯು ಪ್ರತ್ಯೇಕವಾಗಿ ನಡೆಸಲ್ಪಡುತಿದ್ದು, ಸಂಸ್ಕೃತವು ಕಡ್ಡಾಯವಾಗಿ ಇತರ ವಿಷಯಗಳೂ ಕಲಿಸಲ್ಪಡುತ್ತಿವೆ. ಈ ಶಾಲೆಯ ಬಗ್ಗೆ ಶ್ರೀ| ಕಾರ್ಕಳ ಸದಾಶಿವ ರಾವ್, ಅಡ್ವೊಕೇಟ್-ಇವರು ಚೆಯರ್ಮನರಾಗಿರುವ, ಶ್ರೀ| ಜೆ. ವಾಮನ ಭಟ್ ರವರು ಗೌರವ ಮೆನೇಜರರಾಗಿರುವ, ವೇ| ಮೂ| ಎಮ್. ಗೋಪಾಲ ಭಟ್, ಶ್ರೀಗಳಾದ ಎಮ್. ರಾಮಚಂದ್ರ ಪೈ, ಸಾಹುಕಾರ ಎಮ್. ಜಿ. ಅನಂತ ಪೈ ಮತ್ತು ಮೂವರು ಟ್ರಸ್ಟಿಗಳೂ ಸದಸ್ಯರಾಗಿರುವ ಆಡಳಿತ ಸಮಿತಿಯಿದೆ.

ಈ ದೇವಸ್ಥಾನದಿಂದ ಇನ್ನೂ ಅನೇಕ ಸುಧಾರಣೆಗಳೂ ಸಮಾಜೋದ್ಧಾರ ಕಾರ್ಯಗಳೂ ಆಗುವಂತೆ ಎಲ್ಲವರ ಸಹಕಾರ-ಸಹಾಯಗಳೊದಗಲಿ!

■■■■■■■■■

# ‘ಒಂದಾಣೆ ಮಾಲೆ’ಯಲ್ಲಿ ಪ್ರಕಟವಾಗುವ ಕೆಲವು ವಿಷಯಗಳು

ಸಣ್ಣ ಕತೆಗಳು—ಪ್ರಹಸನಗಳು—ನೀಳ್ಗತೆಗಳು—ಏಕಾಂಕ ನಾಟಕಗಳು—ವ್ಯಕ್ತಿಚಿತ್ರ—ದೇಶ-ವಿದೇಶ ಚರಿತ್ರೆ—ವಿಜ್ಞಾನ—ಚಿಕ್ಕ ನಿಘಂಟುಗಳು—ಶಿಲ್ಪ—ಜಗತ್ತಿನ ಶ್ರೇಷ್ಠ ತತ್ವಜ್ಞಾನಿಗಳ ಉಪದೇಶ—ಲಲಿತಕಲೆ—ಸೃಷ್ಟಿಯ ವೈಚಿತ್ರ್ಯಗಳು—ಗೃಹವೈದ್ಯ—ಶೈಕ್ಷಣಿಕ ವಿಚಾರಗಳು—ಗೃಹಿಣಿಯರಿಗೆ ಉಪಯುಕ್ತ ಸಲಹೆಗಳು—ಕ್ಷೇತ್ರಗಳ ವಿವರ—ಸುಭಾಷಿತ—ವಾಙ್ಮಯ ವಿಚಾರ—ಪ್ರಯಾಣ ಕತೆಗಳು—ಸತ್ಯಕಥಾನಕಗಳು, ಇತ್ಯಾದಿ.

ಡಾ| ವಿ. ಆರ್. ಭಟ್, ಟಿ ಡಿ. ಡಿ, ಶ್ರೀ| ಕೋ. ಶ. ಕಾರಂತ, ಬಿ.ಎ., ಬಿ.ಎಲ್., ಶ್ರೀ| ಡಿ. ಪುಟ್ಟಸ್ವಾಮಿ, ಬಿ. ಎ., ಬಿ. ಎಲ್., ಎಡ್ವೊಕೇಟ್, ವೈದ್ಯಗುರು ಎಂ. ಆರ್. ಭಟ್, ದಿ| ಎಮ್. ಎನ್. ಕಾಮತ್, ಶ್ರೀ| ಪಿ. ಎಸ್. ವೆಂಕಟಕೃಷ್ಣ ರಾವ್, ಎಂ.ಎ., ಬಿ.ಟಿ., ಶ್ರೀ| ಎಮ್. ಸುಬ್ರಾಯನ್, ವಿದ್ವಾನ್, ಶ್ರೀ| ಕುಡ್ಪಿ ವಾಸುದೇವ ಶೆಣೈ, ಶ್ರೀ| ಎಲ್. ಎಸ್. ನಾಯಕ, ಡಾ| ಎಸ್. ಪಿ. ಭಟ್--ಮೊದಲಾದವರ ಲೇಖನಗಳು ‘ಒಂದಾಣೆ ಮಾಲೆ’ಯಲ್ಲಿ ಪ್ರಕಟವಾಗುವುವು.

ಕೆಲವು ಪ್ರಕಟಣೆಗಳಲ್ಲಿ 32, 36, ಅಥವಾ ಹೆಚ್ಚು ಪುಟಗಳಿರುವುವು. ಆದರೆ, ಯಾವ ಪ್ರಕಟಣೆಯೂ ಹದಿನಾರು ಪುಟಗಳಿಗಿಂತ ಕಡಿಮೆಯಿಲ್ಲ.

ಈ ವರೆಗೆ ಒಂದಾಣೆ ಮಾಲೆಯಲ್ಲಿ ಪ್ರಕಟವಾಗಿರುವ ಪುಸ್ತಕಗಳು: ೧. ಕೆಪ್ಪಟೆರಾಯ, (ವಿನೋದ ಕಥೆ) ೨) ನಾರೀಶ್ವರರು (ಪ್ರಹಸನ) ೩) ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು (ನೀತಿ ಕಥೆಗಳು) ೪) ಸದ್ರಿ ಸುಬ್ಬ (ಪ್ರಹಸನ); ೫. ಅದ್ಭುತ ತ್ಯಾಗ ಮತ್ತು ಇತರ ಕಥೆಗಳು (ನೀತಿಕಥೆಗಳು); (4) ಚುನಾವಣೆ ಅರ್ಥಾತ್ ಬನಾವಣೆ (ಪ್ರಹಸನ); ೭. ಬೀಡಿ ಸೇದಬೇಡಿ ಮತ್ತು ಆ ಮಗು (ವಿನೋದ ಕಥೆಗಳು); ೮. ಅರ್ಥಕೋಶ; ೯. ಲಂಚಕ್ಕೆ ಸಂಚಕಾರ ೧೦. ಟಿಶ್ಯೂ ಔಷಧಿಗಳ ಕೈಪಿಡಿ; ೧೧. ಶ್ರೀಕ್ಷೇತ್ರ ಧರ್ಮಸ್ಥಳ; ೧೨. ಜೀವದ ಮೌಲ್ಯ; ೧೩. ಸತ್ತವನ ಸೇಡು ಮತ್ತು ಇತರ ಕಥೆಗಳು. ೧೪. “ವೆಂಕಟನ ಸಂಕಟ” (ಏಕಾಂಕ ಪ್ರಹಸನ) ಮತ್ತು ಎರಡು ಕಥೆಗಳು. ೧೫. ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ). ೧೬. ವೇಣೂರಿನ ಗತವೈಭವ. ೧೭. ಒಗಟುಗಳು. ೧೮. ಜಗಳಗಂಟಿ ಮತ್ತು ಇತರ ಕಥೆಗಳು. ೧೯. ರಥೋತ್ಸವ.

**ವಾರಕ್ಕೊಂದು ಹೊಸ ಪುಸ್ತಕ! ಪ್ರತಿ ಶನಿವಾರ ಪ್ರಕಟಣೆ!**

## ಒಂದಾಣೆ ಮಾಲೆ,

**ಪ್ರಭಾತ ಆಫೀಸು, ರಥಬೀದಿ, ಮಂಗಳೂರು—೧.**

# ಒಂದಾಣೆ ಮಾಲೆ ಎಲ್ಲರಿಗಾಗಿ ಇದೆ

ಒಂದಾಣೆ ಮಾಲೆಯಲ್ಲಿ ಈ ವರೆಗೆ ಪ್ರಕಟವಾದ ಪುಸ್ತಕಗಳು

೧. *ಕೆಪ್ಪಟೆರಾಯ (ವಿನೋದ ಕಥೆ) ಲೇ: ದಿ| ಎಮ್.ಎನ್.ಕಾಮತ್
೨. ನಾರೀಶ್ವರರು (ಏಕಾಂಕ ಪ್ರಹಸನ)
೩. *ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು
೪. ಸದ್ರಿಸುಬ್ಬ (ಏಕಾಂಕ ಪ್ರಹಸನ) ಲೇ: ದಿ| ಎಮ್.ಎನ್. ಕಾಮತ್
೫. ಅದ್ಭುತ ತ್ಯಾಗ ಮತ್ತು ಇತರ ಕಥೆಗಳು (ಎಮ್. ಆರ್. ಭಟ್)
೬. ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ)
೭. 'ಬೀಡಿಸೇದಬೇಡಿ' ಮತ್ತು 'ಆ ಮಗು' (ವಿನೋದ ಕಥೆಗಳು)
೮. ಇಂಗ್ಲಿಷ್-ಕನ್ನಡ ಅರ್ಥಕೋಶ (ಭಾರತ ಸಂವಿಧಾನದಿಂದ)
೯. ಲಂಚಕ್ಕೆ ಸಂಚಕಾರ (ಡಾ| ಎಸ್. ಪಿ. ಭಟ್.)
೧೦. ಟಿಶ್ಯೂ ಔಷಧಿಗಳ ಕೈಪಿಡಿ
೧೧. ಶ್ರೀಕ್ಷೇತ್ರ ಧರ್ಮಸ್ಥಳ (ದ್ವಿತೀಯ ಮುದ್ರಣ)
೧೨. ಜೀವದ ಮೌಲ್ಯ (ಎಲ್. ಎಸ್. ನಾಯಕ.)
೧೩. ಸತ್ತವನ ಸೇಡು (ವಿ. ಆರ್. ಭಟ್.)
೧೪. "ವೆಂಕಟನ ಸಂಕಟ" (ಏಕಾಂಕ ಪ್ರಹಸನ) ಮತ್ತು ಎರಡು ಕಥೆಗಳು
೧೫. ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ)
೧೬. ವೇಣೂರಿನ ಗತವೈಭವ ೧೭. ಒಗಟುಗಳು (ಟಿ. ಚಂದ್ರರಾಜ ಸೆಟ್ಟಿ)
೧೮. ಜಗಳಗಂಟಿ ಮತ್ತು ಆತರ ಕಥೆಗಳು ೧೯. ರಥೋತ್ಸವ

* ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

ಪ್ರತೀ ವಾರಕ್ಕೊಂದು ಉತ್ತಮ ಪುಸ್ತಕ.

ಈ ವರೆಗೆ ಹದಿನೇಳು ಪುಸ್ತಕಗಳಲ್ಲಿ, ಒಟ್ಟು ಹದಿನೇಳು ಆಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆಕೂಡಿ 434 ಪುಟಗಳನ್ನು ಕೊಟ್ಟಿರುತ್ತದೆ.

ಒಂದಾಣೆ ಮಾಲೆ,
ಪ್ರಭಾತ ಆಫೀಸು, ರಥಬೀದಿ, ಮಂಗಳೂರು-1.

**ಎಲ್ಲರಿಗೆ ಬೇಕಾದುದು ಒಂದಾಣೆ ಮಾಲೆಯಲ್ಲಿದೆ.**

Edited, Printed and Published by K. V Shenoy
at The Prabhat Printers, Ltd., Mangalore-1.